# ಕರ್ನಾಟಕ ವಿಧಾನ ಪರಿಷತ್ತು

(15ನೇ ವಿಧಾನ ಪರಿಷತ್ತು, 11ನೇ ಅಧಿವೇಶನ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 767 (854)

ಸದಸ್ಯರ ಹೆಸರು : ಶ್ರೀ ಬಿ.ಜಿ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 20.12.2021

ಉತ್ತರಿಸುವವರು : ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| 1 | ಕಲಬುರಗಿ ಹೃದಯ ಭಾಗದಲ್ಲಿರುವ ಪ್ರಾಣಿ ಸಂಗ್ರಹಾಲಯದ ವಿಸ್ತೀರ್ಣ ಎಷ್ಟು; (ವಿವರ ನೀಡುವುದು) | ಕಲಬುರಗಿ ಹೃದಯ ಭಾಗದಲ್ಲಿರುವ ಮಕ್ಕಳ ಉದ್ಯಾನವನ ಮತ್ತು ಕಿರು ಮೃಗಾಲಯದ ವಿಸ್ತೀರ್ಣವು 6-33 ಎಕರೆ ಇರುತ್ತದೆ. |
| 2 | ಪ್ರಾಣಿ ಸಂಗ್ರಹಾಲಯವನ್ನು ಬೇರೆಡೆ ಸ್ಥಳಾಂತರಿಸುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಪ್ರಾಣಿ ಸಂಗ್ರಹಾಲಯವನ್ನು ಬೇರೆಡೆ ಸ್ಥಳಾಂತರಿಸಲು ಕಾರಣವೇನು; (ವಿವರ ನೀಡುವುದು) | ಪ್ರಾಣಿ ಸಂಗ್ರಹಾಲಯವನ್ನು ಬೇರೆಡೆ ಸ್ಥಳಾಂತರಿಸುವ ಪ್ರಸ್ತಾವನೆ ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಸದರಿ ಮೃಗಾಲಯದಲ್ಲಿ ಅಲ್ಪ ಪ್ರಮಾಣದ ಪ್ರಾಣಿ ಪಕ್ಷಿಗಳು ಇರುವುದರಿಂದ ಮತ್ತು ಸ್ಥಳದ ಕೊರತೆಯಿಂದ ಹಾಗೂ ಸದರಿ ಜಾಗವು ಕಲಬುರಗಿ ಮಹಾನಗರ ಪಾಲಿಕೆಯದಾಗಿದ್ದು, ಗುತ್ತಿಗೆ ಪಡೆದು ಬಾಡಿಗೆ ನೀಡಲಾಗುತ್ತಿರುವುದರಿಂದ ಬೇರೆಡೆ ಸ್ಥಳಾಂತರಿಸಲಾಗುವುದು. |
| 3 | ಪ್ರಾಣಿ ಸಂಗ್ರಹಾಲಯವನ್ನು ಸ್ಥಳಾಂತರಿಸಲು ನಿರ್ಧರಿಸಿದ್ದಲ್ಲಿ, ಎಲ್ಲಿ ಮತ್ತು ಎಷ್ಟು ವಿಸ್ತೀರ್ಣದಲ್ಲಿ ಯಾವಾಗ ಪ್ರಾಣಿ ಸಂಗ್ರಹಾಲಯವನ್ನು ನಿರ್ಮಾಣ ಮಾಡಲಾಗುವುದು; ಇದಕ್ಕೆ ತಗಲುವ ವೆಚ್ಚ ಎಷ್ಟು? (ಸಂಪೂರ್ಣ ವಿವರ ನೀಡುವುದು) | ಕಲಬುರಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ಮಾಡಬೂಳ ಗ್ರಾಮದ ಸರ್ವೆ ನಂ.48 ರಲ್ಲಿ ಸ್ಥಳಾಂತರಿಸಲು ನಿರ್ಧರಿಸಲಾಗಿದ್ದು, 42-38 ಎಕರೆ ಜಮೀನಿನ ವಿಸ್ತೀರ್ಣದಲ್ಲಿ ಪ್ರಾಣಿ ಸಂಗ್ರಹಾಲಯವನ್ನು ನಿರ್ಮಿಸಲಾಗುವುದು.<br><br>ಈಗಾಗಲೇ 2525 ಮೀಟರ್ ಕಾಂಪೌಂಡ್ ಗೋಡೆ ನಿರ್ಮಾಣ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದ್ದು, ಅನುದಾನದ ಲಭ್ಯತೆಯನುಸಾರ ಪ್ರಾಣಿ ಸಂಗ್ರಹಾಲಯದ ಇತರೆ ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು.<br><br>ಪ್ರಾಣಿ ಸಂಗ್ರಹಾಲಯವನ್ನು ನಿರ್ಮಾಣ ಮಾಡಲು ಒಟ್ಟು ಅಂದಾಜು ವೆಚ್ಚ ರೂ. 3039.00 ಲಕ್ಷಗಳು ತಗಲುತ್ತದೆ. |

ಸಂಖ್ಯೆ: ಅಪಜೀ 129 ಎಫ್‌ಪಿಸಿ 2021

(ಉಮೇಶ್ ವಿ ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು.